## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1591
ಸದಸ್ಯರ ಹೆಸರು : ಶ್ರೀ ಕಾಂತರಾಜ್
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 20-03-2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ವಾಯು ಮಾಲಿನ್ಯವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಈ ಹಿಂದೆ ಎಲೆಕ್ಟ್ರಿಕ್ ಬಸ್‌ಗಳನ್ನು ಕೆ.ಎಸ್.ಆರ್.ಟಿ.ಸಿ/ ಬಿ.ಎಂ.ಟಿ.ಸಿ.ಗೆ ಗುತ್ತಿಗೆ ಆಧಾರದ ಮೇಲೆ ಅಥವಾ ಖರೀದಿಗಾಗಿ ತೆಗೆದುಕೊಳ್ಳಲು ಸರ್ಕಾರ ತೀರ್ಮಾನ ಕೈಗೊಂಡಿದೆಯೇ; | ಕೇಂದ್ರ ಸರ್ಕಾರದ ಭಾರಿ ಕೈಗಾರಿಕೆ ಇಲಾಖೆಯ ಫೇಮ್-1 ಯೋಜನೆಯಡಿ ಬೆಂ.ಮ.ಸಾ.ಸಂಸ್ಥೆಯಿಂದ 80 ಬಸ್ಸುಗಳ ಆಚರಣೆಗೆ OPEX ಮಾದರಿಯಲ್ಲಿ ನೀಡಿರುವ LoI ಅನ್ನು ರದ್ದುಗೊಳಿಸಿ ಕೇಂದ್ರ ಸರ್ಕಾರವು ನೀಡಿರುವ ಆರ್ಥಿಕ ಸಹಾಯವನ್ನು ಉಪಯೋಗಿಸಿಕೊಳ್ಳುವ ಅವಧಿಯನ್ನು ವಿಸ್ತರಿಸಿಕೊಂಡು 80 ಎಲೆಕ್ಟ್ರಿಕ್ ಬಸ್ಸುಗಳನ್ನು ಖರೀದಿಸಲು ತೀರ್ಮಾನಿಸಲಾಗಿತ್ತು. ಆದರೆ ಮಾರ್ಚ್-31, 2019ಕ್ಕೆ ಫೇಮ್-1 ಯೋಜನೆಯು ಮುಕ್ತಾಯಗೊಂಡಿರುತ್ತದೆ. ಕೇಂದ್ರ ಸರ್ಕಾರದ ಭಾರಿ ಕೈಗಾರಿಕೆ ಇಲಾಖೆಯ ಆದೇಶದಂತೆ ಸಂಸ್ಥೆಗೆ ಬಿಡುಗಡೆ ಮಾಡಿದ್ದ ಆರ್ಥಿಕ ಸಹಾಯವನ್ನು ಹಿಂದಿರುಗಿಸಲಾಗಿರುತ್ತದೆ.<br><br>ಪ್ರಸ್ತುತ, ಕೇಂದ್ರ ಸರ್ಕಾರವು ಭಾರಿ ಕೈಗಾರಿಕಾ ಇಲಾಖೆಯ ಮುಖಾಂತರ OPEX ಮಾದರಿಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ನಿಯೋಜಿಸಲು ವಿವಿಧ ಸಂಸ್ಥೆಗಳಿಗೆ ಆರ್ಥಿಕ ಪ್ರೋತ್ಸಾಹವನ್ನು ಒದಗಿಸಲು ಫೇಮ್-2 ಯೋಜನೆಯನ್ನು ಪ್ರಾರಂಭಿಸಿದ್ದು, ಸದರಿ ಯೋಜನೆಯಡಿಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ಕ.ರಾ.ರ.ಸಾ.ನಿಗಮ, ಬೆಂ.ಮ.ಸಾ.ಸಂಸ್ಥೆ ಮತ್ತು ವಾ.ಕ.ರ.ಸಾ.ಸಂಸ್ಥೆಗಳಿಗೆ ಆಚರಣಾ ವೆಚ್ಚದ ಆಧಾರದ ಮೇಲೆ ಮಂಜೂರಾತಿ ನೀಡಿದೆ. ಅದರಂತೆ, ಟೆಂಡರ್ ಆಹ್ವಾನಿಸಲಾಗಿದ್ದು, ಪ್ರಕ್ರಿಯೆ ಜಾರಿಯಲ್ಲಿರುತ್ತದೆ.<br><br>ಕೇಂದ್ರ ಸರ್ಕಾರದ ಫೇಮ್-2 ಯೋಜನೆಯು 1ನೇ ಏಪ್ರಿಲ್ 2019ರಿಂದ ಪ್ರಾರಂಭವಾಗಿದ್ದು ಮೂರು ವರ್ಷ ಅವಧಿಗೆ ಸೀಮಿತವಾಗಿರುತ್ತದೆ. ಮುಂದುವರೆದು, ಎಲೆಕ್ಟ್ರಿಕ್ ಬಸ್ಸುಗಳ ಆಚರಣೆಗೆ ಆದೇಶ ನೀಡಲು ಕೇಂದ್ರ ಸರ್ಕಾರವು ದಿನಾಂಕ: 29.02.2020ರವರೆಗೆ ಅಂತಿಮ ದಿನಾಂಕ ನೀಡಿದ್ದು, ಆಚರಣೆ ಆದೇಶವನ್ನು ನೀಡುವ ದಿನಾಂಕವನ್ನು ಟೆಂಡರ್ ಪ್ರಕ್ರಿಯೆಯು ಪೂರ್ಣಗೊಳ್ಳುವವರೆಗೂ ನೀಡಲು ಕೇಂದ್ರ ಸರ್ಕಾರವನ್ನು ಕೋರಲಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಈ ಪ್ರಸ್ತಾವನೆಯು ಯಾವ ಹಂತದಲ್ಲಿ ಇದೆ; ಇಷ್ಟೊಂದು ವಿಳಂಬವಾಗಲು ಕಾರಣಗಳೇನು; (ವಿವರ ನೀಡುವುದು) | |
| ಇ | ಅಲ್ಲದೆ, ಎಲೆಕ್ಟ್ರಿಕ್ ಬಸ್‌ಗಳಿಗೆ ಕೇಂದ್ರ ಸರ್ಕಾರ ಸಹಾಯಧನ ನೀಡಿದ್ದರೂ ಸಹ ಈ ಸಹಾಯಧನವನ್ನು ಬಳಸಿಕೊಳ್ಳದೆ ವಿಳಂಬ ದೋರಣೆಯಿಂದ ಕೇಂದ್ರ ಸರ್ಕಾರದ ಸಹಾಯಧನ ನಿಂತು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಈ | ಬಂದಿದ್ದಲ್ಲಿ ಈ ವಿಳಂಬ ಧೋರಣೆಗೆ ಕಾರಣರಾದ ಅಧಿಕಾರಿ ಯಾರು; ಈ ಅಧಿಕಾರಿಯ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮವೇನು? (ವಿವರ ನೀಡುವುದು) | |

ಸಂಖ್ಯೆ: ಟಿಡಿ 128 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು